# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | **1197** |
| ಸದಸ್ಯರ ಹೆಸರು | : | ಶ್ರೀ ಹೆಚ್. ಎಂ. ರಮೇಶ್ ಗೌಡ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 07-03-2022 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

***

| | ಪ್ರಶ್ನೆ | ಉತ್ತರ |
|---|---|---|
| ಅ) | ರೈತರ ಬೆಳೆಗಳಿಗೆ ಪಂಪ್‌ಸೆಟ್ ಮೂಲಕ ನೀರು ಹರಿಸಲು ನೀಡುತ್ತಿರುವ ವಿದ್ಯುತ್‌ಗೆ ನಿಗದಿತ ಸಮಯ ಇಲ್ಲದಿರುವುದರಿಂದ ರೈತರಿಗೆ ತೊಂದರೆಯಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಈ ಬಗ್ಗೆ ಸರ್ಕಾರ ಕೈಗೊಂಡ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ಪ್ರಸ್ತುತ ಸರ್ಕಾರದ ಆದೇಶದಂತೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ತಾಂತ್ರಿಕ ಸಾಧ್ಯತೆ ಇರುವ ಕಡೆ ಹಗಲಿನ ವೇಳೆಯಲ್ಲಿಯೇ ನಿರಂತರ 7 ಗಂಟೆಗಳ ಕಾಲ 3 ಫೆಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ತಾಂತ್ರಿಕ ಸಾಧ್ಯತೆ ಇಲ್ಲದಿರುವ ಕಡೆಗಳಲ್ಲಿ ಹಗಲಿನ ವೇಳೆಯಲ್ಲಿ 3 ಅಥವಾ 4 ಗಂಟೆಗಳ ಕಾಲ ಹಾಗೂ ರಾತ್ರಿ ವೇಳೆಯಲ್ಲಿ 4 ಅಥವಾ 3 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಬೆಸ್ಕಾಂ ಮತ್ತು ಹೆಸ್ಕಾಂ ವ್ಯಾಪ್ತಿಯ ಕೆಲವೊಂದು ಪ್ರದೇಶಗಳಲ್ಲಿ ಹಗಲಿನ ವೇಳೆಯಲ್ಲಿಯೇ ನಿರಂತರ 7 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲು ತಾಂತ್ರಿಕ ಸಾಧ್ಯತೆ ಇದ್ದರೂ ರೈತರ ಹಾಗೂ ಜನಪ್ರತಿನಿಧಿಗಳ ಮನವಿ ಮೇರೆಗೆ ಪಾಳಿಗಳಲ್ಲಿ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಆ) | ಬೇಸಿಗೆ ಕಾಲದಲ್ಲಿ ಬೆಳೆಗಳಿಗೆ ಹೆಚ್ಚಿನ ನೀರು ಹರಿಸಬೇಕಾಗಿರುವುದರಿಂದ ರೈತರ ಪಂಪ್‌ಸೆಟ್‌ಗಳಿಗೆ ಹೆಚ್ಚುವರಿ ವಿದ್ಯುತ್ ನೀಡುವ ಬಗ್ಗೆ ಸರ್ಕಾರ ಚಿಂತಿಸಿದೆಯೇ; ಹಾಗಿದ್ದಲ್ಲಿ, ಹೆಚ್ಚುವರಿಯಾಗಿ ವಿದ್ಯುತ್ ಒದಗಿಸುವ ಬಗ್ಗೆ ಸರ್ಕಾರದ ನಿಲುವೇನು; | ರೈತರ ನೀರಾವರಿ ಪಂಪ್‌ಸೆಟ್‌ಗಳಿಗೆ ಹೆಚ್ಚಿನ ಅವಧಿಯ ವಿದ್ಯುತ್ ನೀಡುವ ಪ್ರಸ್ತಾವನೆ ಸಧ್ಯಕ್ಕೆ ಸರ್ಕಾರದ ಮುಂದೆ ಇರುವುದಿಲ್ಲ. |

| | | |
|---|---|---|
| ಇ) | ರೈತರಿಗೆ ಹೊಸದಾಗಿ ಪಂಪ್‌ಸೆಟ್‌ಗಳಿಗೆ ವಿದ್ಯುತ್ ಟ್ರಾನ್ಸ್‌ಫಾರ್ಮರ್ (ಟಿ.ಸಿ.) ಪಡೆಯಲು ಇರುವ ಮಾನದಂಡಗಳೇನು? (ಸಂಪೂರ್ಣ ವಿವರ ನೀಡುವುದು) | ಸರ್ಕಾರದ ಸುತ್ತೋಲೆ ದಿನಾಂಕ :14.07.2014 ಮತ್ತು 23.07.2014 ರನ್ವಯ ಹೊಸ ಸಂಪರ್ಕ ಅಥವಾ ಅನಧಿಕೃತ ಸಂಪರ್ಕವೆಂಬ ಭೇದವನ್ನು ತೆಗೆದುಹಾಕಿ ನೀರಾವರಿ ಪಂಪಸೆಟ್ ಗಳಿಗೆ ವಿದ್ಯುತ್ ಸಂಪರ್ಕ ಪಡೆಯಲು ರೂ.10000/- ಶುಲ್ಕದ ಜೊತೆಗೆ ಠೇವಣಿ ಹಣವನ್ನು ಪಾವತಿಸಿರುವ ರೈತರಿಗೆ ಆದ್ಯತೆಯ ಮೇರೆಗೆ ವಿದ್ಯುತ್ ಮೂಲಭೂತ ಸೌಕರ್ಯವನ್ನು ಕಲ್ಪಿಸಲಾಗುತ್ತಿದೆ. ಸ್ಥಳ ಪರಿಶೀಲನೆ ಮಾಡಿದ ನಂತರ ಪಂಪ್‌ಸೆಟ್‌ಗೆ ಸನಿಹ ಇರುವ ವಿದ್ಯುತ್ ಮಾರ್ಗದ ಲಭ್ಯತೆ ಮತ್ತು ಹಾಲಿ ಇರುವ ಪರಿವರ್ತಕದ ಹೊರೆಯನ್ನು ಪರಿಶೀಲಿಸಿ ಒಂದು ವೇಳೆ ಪರಿವರ್ತಕದ ಹೊರೆಯು ಹೆಚ್ಚಾಗಿದ್ದಲ್ಲಿ, ಹೊಸದಾಗಿ ಟಿ.ಸಿ.ಯನ್ನು ಅಳವಡಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ. ಮೂಲಭೂತ ಸೌಕರ್ಯ ಅವಶ್ಯಕತೆ ಇಲ್ಲದಿದ್ದಲ್ಲಿ ಸರ್ವಿಸ್ ಮೈನ್ ಮೂಲಕ ವಿದ್ಯುತ್ ಸಂಪರ್ಕ ಕಲ್ಪಿಸಲಾಗುತ್ತಿದೆ. |

ಸಂಖ್ಯೆ: ಎನರ್ಜಿ 52 ಇಬಿಎಸ್ 2022

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು